

# ಕರ್ನಾಟಕ ವಿಧಾನ ಪರಿಷತ್ತು

## ನೂರ ನಲವತ್ತ ಮೂರನೆಯ ಅಧಿವೇಶನದ ಮುಂದುವರೆದ ಉಪವೇಶನ

**ಚುಕ್ಕೆ ರಹಿತ ಪ್ರಶ್ನೆ**

ದಿನಾಂಕ : 17-03-2021 ಪ್ರಶ್ನೆ ಸಂಖ್ಯೆ : 1249 (1496)

ಸದಸ್ಯರ ಹೆಸರು ಮತ್ತು ಕ್ಷೇತ್ರ : ಶ್ರೀ ಪಿ.ಆರ್. ರಮೇಶ್ (ನಾಮನಿರ್ದೇಶನ)

ಉತ್ತರ ನೀಡಬೇಕಾದ ದಿನಾಂಕ : 17-03-2021

ಉತ್ತರಿಸುವ ಸಚಿವರು : ಉಪ ಮುಖ್ಯಮಂತ್ರಿಗಳು ಹಾಗೂ ಲೋಕೋಪಯೋಗಿ ಸಚಿವರು

ವಿಷಯ : ಹಿಂದುಳಿದ ವರ್ಗಗಳ ಕಲ್ಯಾಣ ಯೋಜನೆಗಳ ಕುರಿತು

(ಅ) ರಾಜ್ಯದಲ್ಲಿನ ಹಿಂದುಳಿದ ವರ್ಗಗಳ ಜನಾಂಗಗಳಿಗೆ ಸರ್ಕಾರದಿಂದ ಸಿಗುವ ಸೌಲಭ್ಯ / ಸವಲತ್ತುಗಳ ವಿವರ ನೀಡುವುದು;

(ಆ) ಕಳೆದ ಐದು ವರ್ಷಗಳಲ್ಲಿ ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖೆಗೆ ರಾಜ್ಯ ಸರ್ಕಾರದಿಂದ ಬಿಡುಗಡೆಯಾದ ಅನುದಾನವೆಷ್ಟು; ಖರ್ಚಾದ ಅನುದಾನವೆಷ್ಟು; (ವಿವರ ನೀಡುವುದು)

(ಇ) ರಾಜ್ಯದಲ್ಲಿ ಹಿಂದುಳಿದ ವರ್ಗಗಳಿಗೆ ಸೇರಿದ ವಿದ್ಯಾರ್ಥಿಗಳಿಗೆ ಒಟ್ಟು ಎಷ್ಟು ವಿದ್ಯಾರ್ಥಿವೇತನಗಳನ್ನು ನೀಡಲಾಗುತ್ತಿವೆ ; (ಕಳೆದ ಐದು ವರ್ಷಗಳಿಂದ ನೀಡಲಾದ ವಾರ್ಷಿಕವಾರು ಮಾಹಿತಿಯನ್ನು ನೀಡುವುದು)

(ಈ) ಕೋವಿಡ್-19 ಸಾಂಕ್ರಾಮಿಕ ಸೋಂಕು ಹಿನ್ನೆಲೆಯಲ್ಲಿ ರಾಜ್ಯದ ಹಲವಾರು ವಿದ್ಯಾರ್ಥಿಗಳ ವಿದ್ಯಾರ್ಥಿವೇತನಗಳ ವಿತರಣೆ ಅಥವಾ ಬಟವಾಡೆಯಲ್ಲಿ ವಿಳಂಬವಾಗಿರುವ ವಿಷಯ ಸರ್ಕಾರದ ಗಮನಕ್ಕೆ ಬಂದಿದೆಯೇ; ಬಂದಿದ್ದಲ್ಲಿ, ಸರ್ಕಾರದ ಕ್ರಮವೇನು ? (ವಿವರ ನೀಡುವುದು)